# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಎನ್. ಅಪ್ಪಾಜಿಗೌಡ<br>(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 337 |
| ಉತ್ತರಿಸಬೇಕಾದ ದಿನಾಂಕ | : | 14.09.2021 |
| ಉತ್ತರಿಸಬೇಕಾದ ಸಚಿವರು | : | ಸಹಕಾರ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ವಿಭಾಗ, ಇವರ ಆದೇಶ ದಿನಾಂಕ: 16.11.2000ದಂತೆ, ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 65ರ ವಿಚಾರಣೆಯನ್ನು ಬಾಪೂಜಿ ಸಿ.ಹೆಚ್.ಎಸ್.ಸಿ. ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು ಇಲ್ಲಿನ ಅಂದಿನ ನಿರ್ದೇಶಕರುಗಳ ವಿರುದ್ಧ ಸುಮೊಟೋ ಕೇಸ್ ದಾಖಲಾಗಿ 2000 ದಲ್ಲಿ ಸುಮಾರು ಆಸ್ತಿಗಳನ್ನು ಮುಟ್ಟುಗೋಲು ಹಾಕಲಾಗಿದ್ದು, ಈ ಆಸ್ತಿಯನ್ನು ಹರಾಜು ಹಾಕಲಾಗಿದೆಯೇ; ಅಥವಾ ಇಲ್ಲವೇ; | ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ1959ರ ಕಲಂ 65 ರಡಿ ವಿಚಾರಣೆ ನಡೆಸಿದ್ದು ದಿನಾಂಕ:31.05.2001 ರಂದು ಪರಿವೀಕ್ಷಣಾ ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯನ್ವಯ ಕಲಂ 69 ರಡಿ ಸ್ವಯಂ ಅಧಿಭಾರ ಪ್ರಕರಣ ದಾಖಲಿಸಿಕೊಳ್ಳಲಾಗಿರುತ್ತದೆ. ಅಧಿಭಾರ ಪ್ರಕರಣದಲ್ಲಿ ಸಂಘದ ಹಿಂದಿನ ಅಧ್ಯಕ್ಷರಾದ ಡಿ. ರಾಜ್‌ಕುಮಾರ್ ಹಾಗೂ ಉಪಾಧ್ಯಕ್ಷರಾದ ಎಂ.ವಿ.ರುದ್ರಾಚಾರ್ ಹಾಗೂ ಸಂಘದ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಕಲಂ 103 ರಡಿ ಆದೇಶ ಪೂರ್ವ ಜಪ್ತಿಗೊಳಪಡಿಸಲಾಗಿದೆ. ಮಾಹಿತಿಯನ್ನು **ಅನುಬಂಧ -1** ರಲ್ಲಿ ನೀಡಲಾಗಿದೆ.<br><br>ಸಂಘವು ಜಪ್ತಿಯಾದ ಆಸ್ತಿಗಳನ್ನು ಹರಾಜು ಪ್ರಕ್ರಿಯೆಗೆ ಒಳಪಡಿಸಿದ್ದು, ಈ ಪೈಕಿ ನಾಲ್ಕು ಆಸ್ತಿಗಳು ಹರಾಜು ಮುಖಾಂತರ ಮಾರಾಟವಾಗಿರುತ್ತವೆ. ಉಳಿದ ಆಸ್ತಿಗಳನ್ನು ಸಂಘವು ಹರಾಜು ಪ್ರಕ್ರಿಯೆಗೆ ಒಳಪಡಿಸಿದಾಗ ಕಾನೂನು ತೊಡಕುಗಳು ಉಂಟಾಗಿದ್ದು, ಹರಾಜು ಪ್ರಕ್ರಿಯೆ ಬಾಕಿಯಿರುತ್ತದೆ. ಮಾಹಿತಿಯನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಆ) | ಹಾಗಿದ್ದಲ್ಲಿ, ಈ ಸಂಬಂಧ ಎಷ್ಟು ಆಸ್ತಿಗಳನ್ನು ಹರಾಜು ಮಾಡಿ ಹರಾಜಿನಿಂದ ಎಷ್ಟು ಹಣ ವಸೂಲಾಗಿದೆ; ಇನ್ನೂ ಬಾಕಿ ಇರುವುದೆಷ್ಟು; | ಸಂಘವು ಒಟ್ಟು ನಾಲ್ಕು ಆಸ್ತಿಗಳನ್ನು ಮಾರಾಟ ಮಾಡಲಾಗಿದ್ದು, ಅದರಿಂದ ಒಟ್ಟು ರೂ 3,35,37,000/- ಗಳು ವಸೂಲಾಗಿರುತ್ತದೆ.<br><br>ಸಂಘದ 2019-20 ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ಸಂಘಕ್ಕೆ ದುರುಪಯೋಗದ ಮೊತ್ತ ರೂ.21,40,68,015/- (ರೂಪಾಯಿ ಇಪ್ಪತ್ತೊಂದು ಕೋಟಿ ನಲವತ್ತು ಲಕ್ಷದ ಅರವತ್ತೆಂಟು ಸಾವಿರದ ಹದಿನೈದು ಮಾತ್ರ) ಬಾಕಿ ಇರುತ್ತದೆ. |
| ಇ) | ಈವರೆವಿಗೆ ಸೊಸೈಟಿಯಿಂದ ನಿವೇಶನ ದೊರೆಯದ ಎಷ್ಟು ಸದಸ್ಯರುಗಳಿಗೆ ಕಲಂ 65ರ ವರದಿಯಂತೆ ಹಣ ವಾಪಸ್ಸು ನೀಡಲಾಗಿದೆ; (ವಿವರ ನೀಡುವುದು) | ನಿವೇಶನ ದೊರೆಯದ ಒಟ್ಟು 15 ಸದಸ್ಯರುಗಳಿಗೆ ರೂ.48,79,600/- ಗಳ ನಿವೇಶನ ಠೇವಣಿ ಹಣವನ್ನು ವಾಪಸ್ಸು ನೀಡಲಾಗಿರುತ್ತದೆ. ವಿವರಗಳು ಈ ಕೆಳಕಂಡಂತಿರುತ್ತದೆ. |

| ಕ್ರ. ಸಂ. | ಸದಸ್ಯರ ಹೆಸರು | ಮೊತ್ತ |
|---|---|---|
| 1 | ಪಿ.ವಿ.ಚಿನ್ನೇಗೌಡ | 4,10,000 |

| | | |
|---|---|---|
| 2 | ಎಂ. ನರಸಿಂಹ ರೆಡ್ಡಿ | 1,89,000 |
| 3 | ವಿನ್ಸೆಂಟ್ ಎಲ್.ಎ. | 4,21,000 |
| 4 | ಲೀಲಾ ಕುಶಾಲಪ್ಪ | 3,60,000 |
| 5 | ನಾಗೇಂದ್ರ ಸಿಂಗ್ ಕೆ. | 48,000 |
| 6 | ಕೆಂಪಲಿಂಗಯ್ಯ | 23,000 |
| 7 | ಸರೋಜಿನಿ ಜಾರ್ಜ್ | 18,000 |
| 8 | ನಂಜುಂಡೇ ಗೌಡ ಎಂ. | 1,05,000 |
| 9 | ನಿರ್ಮಲ | 85,000 |
| 10 | ಸುಮಿತ್ರ ದೇವಮ್ಮ ಬಿ.ಟಿ. | 72,000 |
| 11 | ಜಿ.ಎಸ್. ಸುಧೀಂದ್ರ | 4,88,600 |
| 12 | ದಾಕ್ಷಾಯಿಣಿ | 1,50,000 |
| 13 | ಗಂಗಾಧರ | 3,10,000 |
| 14 | ವೇಣುಗೋಪಾಲ್ ಬಿ. | 7,00,000 |
| 15 | ಆರ್. ಕೆ. ಸೋಮಶೇಖರ್ | 15,00,000 |
| | **ಒಟ್ಟು** | 48,79,600 |

| | | |
|---|---|---|
| **ಈ)** | ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ನಗರ ಜಿಲ್ಲೆ-2, ಬೆಂಗಳೂರು ಇವರು ನ್ಯಾಯಾಲಯದ ದಿನಾಂಕ:02.02.2009ರ ಆದೇಶದಂತೆ ಜಪ್ತಿ ಮಾಡಿದ ಆಸ್ತಿಗಳೆಷ್ಟು: ಅವುಗಳನ್ನು ಹರಾಜು ಮಾಡಲಾಗಿದೆಯೇ ಅಥವಾ ಇಲ್ಲವೇ: (ವಿವರ ನೀಡುವುದು) | ಸಂಘದ 1998-99 ಮತ್ತು 1999-2000 ನೇ ಸಾಲಿನ ಲೆಕ್ಕಪರಿಶೋಧನಾ ವರದಿಯನ್ವಯ ಸಂಘದಲ್ಲಿ ದುರುಪಯೋಗವಾದ ರೂ 1,90,14,213/-ಗಳ ವಸೂಲಾತಿಗಾಗಿ ಸಂಘದವರು ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ನಗರ ಜಿಲ್ಲೆ-2, ಬೆಂಗಳೂರು ಇವರು ನ್ಯಾಯಾಲಯದಲ್ಲಿ ಕಲಂ 69 ರಡಿ ಅಧಿಬಾರ ಪ್ರಕರಣವನ್ನು ದಾಖಲಿಸಿದ್ದು, ದಿನಾಂಕ:02.02.2009 ರಂದು ಹಣ ದುರುಪಯೋಗವಾದ ಮೊತ್ತವನ್ನು ವಸೂಲಾತಿ ಮಾಡಲು ಒಟ್ಟು 11 ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 103(1) ರಡಿ ತೀರ್ಪಿಗೆ ಪೂರ್ವ ಜಪ್ತಿ ಆದೇಶ ಹೊರಡಿಸಲಾಗಿದೆ.<br><br>ಸದರಿ ಪ್ರಕರಣದ ವಿಚಾರಣೆ ನಡೆಸಿ ದಿನಾಂಕ:05.09.2009 ರಂದು 1998-99 ಮತ್ತು 1999-2000 ನೇ ಸಾಲಿನ ಆಡಿಟ್ ವರದಿಯ ಆಸ್ತಿ ಜವಾಬ್ದಾರಿ ತ:ಖ್ತೆಯಲ್ಲಿ ಹಣದುರುಪಯೋಗಕ್ಕೆ ಸಂಬಂಧಿಸಿದಂತೆ ನೇರವಾಗಿ ಅಧ್ಯಕ್ಷರು ಹಾಗೂ ಕಾರ್ಯದರ್ಶಿ/ಉಪಾಧ್ಯಕ್ಷರನ್ನೇ ಹೊಣೆಗಾರರನ್ನಾಗಿ ಮಾಡಲಾಗಿರುವ ಹಿನ್ನಲೆಯಲ್ಲಿ ಮೇಲ್ಕಂಡ ಆದೇಶದಲ್ಲಿ ನಮೂದಾಗಿದ್ದ ಪ್ರತಿವಾದಿ 3 ರಿಂದ 11 ರವರೆಗಿನ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಆದೇಶ ಪೂರ್ವ ಜಪ್ತಿಯಿಂದ ಬಿಡುಗಡೆಗೊಳಿಸಲಾಗಿರುತ್ತದೆ.<br><br>ಈ ಹಿನ್ನಲೆಯಲ್ಲಿ ದಿನಾಂಕ 02.02.2009 ರ ಆದೇಶದಲ್ಲಿ ಜಪ್ತಿ ಮಾಡಲು ಸೂಚಿಸಿರುವ ಯಾವುದೇ ಸ್ಥಿರಾಸ್ತಿಗಳು ಜಪ್ತಿಗೆ ಲಭ್ಯವಿರುವುದಿಲ್ಲ. ಸದರಿ ಮೊತ್ತಕ್ಕೆ ಸಂಘದ ಅಂದಿನ ಅಧ್ಯಕ್ಷರು ಶ್ರೀ ಡಿ. ರಾಜ್‌ಕುಮಾರ್ ಹಾಗೂ ಉಪಾಧ್ಯಕ್ಷರಾಗಿದ್ದ ಶ್ರೀ ಎಂ.ವಿ ರುದ್ರಾಚಾರ್ ಇವರುಗಳನ್ನು ಜವಾಬ್ದಾರನ್ನಾಗಿಸಿದ್ದು, ದುರುಪಯೋಗದ ಮೊತ್ತ ರೂ 1,90,14,213/- ಗಳನ್ನು ದಿನಾಂಕ:01.04.2000 ರಿಂದ ಶೇ. 18 ರ ಬಡ್ಡಿಯೊಂದಿಗೆ ಅವರ ಚರ ಮತ್ತು ಸ್ಥಿರಾಸ್ತಿಗಳನ್ನು ಕಾನೂನಿನನ್ವಯ ಮಾರಾಟ ಮಾಡುವುದರ ಮೂಲಕ ವಸೂಲಾತಿ ಮಾಡಲು ಸಹಕಾರ ಸಂಘಗಳ ಉಪ ನಿಬಂಧಕರು, |

| | | |
|---|---|---|
| | | ಬೆಂಗಳೂರು ನಗರ ಜಿಲ್ಲೆ-2, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಿನಾಂಕ:05.06.2010 ರಂದು ಆದೇಶಿಸಲಾಗಿದೆ.<br><br>ಈಗಾಗಲೇ ಕಲಂ 65 ರ ಪರಿವೀಕ್ಷಣಾ ವರದಿಯಲ್ಲಿ ಕಂಡುಬಂದ ಹಣ ದುರುಪಯೋಗದ ಬಗ್ಗೆ ಕಲಂ 69 ರಡಿ ಅಧಿಬಾರ ಪ್ರಕರಣದ ದಿನಾಂಕ:27.05.2002 ರ ಆದೇಶದಲ್ಲಿ ಸಂಘದ ಅಂದಿನ ಅಧ್ಯಕ್ಷರಾದ ಶ್ರೀ ಡಿ. ರಾಜ್ ಕುಮಾರ್ ಹಾಗೂ ಉಪಾಧ್ಯಕ್ಷರಾಗಿದ್ದ ಶ್ರೀ ಎಂ.ವಿ ರುದ್ರಾಚಾರ್ ಇವರುಗಳ ಸ್ಥಿರಾಸ್ತಿಗಳನ್ನು ಆದೇಶ ಪೂರ್ವ ಜಪ್ತಿಗೆ ಒಳಪಡಿಸಲಾಗಿದ್ದು, ಹರಾಜು ಪ್ರಕ್ರಿಯೆಗಳು ಭಾಗಶಃ ಪೂರ್ಣಗೊಂಡು ವಸೂಲಾತಿ ಕ್ರಮವು ಚಾಲ್ತಿಯಲ್ಲಿರುತ್ತವೆ. ಕೆಲವು ಪ್ರಕರಣಗಳಲ್ಲಿ ಹರಾಜು ಪ್ರಕ್ರಿಯೆಗೆ ಕಾನೂನು ತೊಡಕುಗಳಿಂದ ವಿಳಂಬವಾಗಿರುತ್ತದೆ. |
| ಉ) | ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ್ಯ ಇವರು ದಿನಾಂಕ: 21.06.2021ರಲ್ಲಿ ಕಲಂ. 29(ಸಿ) ಆದೇಶದಲ್ಲಿ ಈಗಿನ ನಿರ್ದೇಶಕರುಗಳನ್ನು ಅನರ್ಹಗೊಳಿಸಿದ್ದು, ರೂ. 23.00 ಕೋಟಿ 74ಲಕ್ಷ ರೂಪಾಯಿಗಳ ಅವ್ಯವಹಾರದ ಬಗ್ಗೆ ನಿರ್ದೇಶಕರುಗಳ ವಿರುದ್ಧ ಕ್ರಿಮಿನಲ್ ಕೇಸು ದಾಖಲು ಮಾಡಲಾಗಿದೆಯೇ: ಹಣ ವಸೂಲಾತಿಗೆ ನಿರ್ದೇಶಕರುಗಳ ಆಸ್ತಿ ಜಪ್ತಿಗೆ ಕ್ರಮವಹಿಸಲಾಗಿದೆಯೇ? (ಮಾಹಿತಿ ನೀಡುವುದು) | ಸಂಘದ ಅವ್ಯವಹಾರದ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ವಿಚಾರಣೆಗೆ ದಿನಾಂಕ:29.08.2016 ರಂದು ಆದೇಶಿಸಿದ್ದು, ವಿಚಾರಣಾಧಿಕಾರಿಯವರು ಒಟ್ಟು 06 ಆರೋಪಗಳ ಕುರಿತಂತೆ ದಿನಾಂಕ:18.01.2018 ರಂದು ವಿಚಾರಣಾ ವರದಿ ಸಲ್ಲಿಸಿರುತ್ತಾರೆ.<br><br>ಕಲಂ 64 ರ ವಿಚಾರಣಾ ವರದಿಯ ಆರೋಪ ಸಂಖ್ಯೆ 05 ರಲ್ಲಿ "ಬೇತು ಗ್ರಾಮದಲ್ಲಿರುವ 16 ಎಕರೆ 50 ಸೆಂಟ್ ಜಮೀನಿಗೆ ಸಂಬಂಧಪಟ್ಟಂತೆ ನೋಂದಣಿ ಮತ್ತು ಮುದ್ರಾಂಕ ಇಲಾಖೆ ನಿಗಧಿ ಮಾಡಿ ಬೆಲೆ ಪಟ್ಟಿ ಪ್ರಕಾರ ಭೂಪರಿವರ್ತಿತ ಜಮೀನಿನ ಬೆಲೆ ಪ್ರತಿ ಸೆಂಟ್‌ಗೆ ರೂ.1.50 ಲಕ್ಷ ಬೆಲೆ ನಿಗಧಿಪಡಿಸಲಾಗಿದೆ. ಅದರಂತೆ ಸದರಿ ಜಮೀನಿನ ಬೆಲೆ ರೂ. 24.75 ಕೋಟಿಗಳಾಗಬೇಕಾಗಿರುತ್ತದೆ. ಆದರೆ ಸದರಿ ಜಮೀನನ್ನು ರೂ.1 ಕೋಟಿ 1 ಸಾವಿರಗಳಿಗೆ ಮಾರಾಟ ಮಾಡಿ ಸಂಘಕ್ಕೆ ರೂ.23 ಕೋಟಿ 74 ಲಕ್ಷಗಳನ್ನು ಆಡಳಿತ ಮಂಡಲಿಯು ನಷ್ಟ ಉಂಟು ಮಾಡಿರುವ ಬಗ್ಗೆ ಪರಿಶೀಲಿಸಿ ಸಂಬಂಧಪಟ್ಟವರ ವಿರುದ್ಧ ಜವಾಬ್ದಾರಿ ನಿಗಧಿ ಪಡಿಸುವುದು" ಎಂದು ಇರುತ್ತದೆ.<br><br>ಸಂಘವು ದಿನಾಂಕ:27.05.2002 ರಲ್ಲಿ ಜಪ್ತಿ ಪೂರ್ವ ಆದೇಶ ಪಡೆದ ಬೇತು ಗ್ರಾಮದ 16 ಎಕರೆ 50 ಸೆಂಟ್ ಜಮೀನಿನ ಹರಾಜು ಪ್ರಕ್ರಿಯೆಯ ಅಂಶವು ಒಳಗೊಂಡಿರುತ್ತದೆ. ಶ್ರೀ ಡಿ. ರಾಜಕುಮಾರ್ ಇವರು ಡಿಕ್ರಿ ಆಗಿರುವ ಈ ಆಸ್ತಿಯನ್ನು ದಿನಾಂಕ:30.07.2009ರಂದು ಆರ್. ಎಂ. ಅಬ್ದುಲ್ ಸಲಾಮ್ ಹಾಗೂ ಇಬ್ಬರಿಗೆ ರೂ.37 ಲಕ್ಷಕ್ಕೆ ಮಾರಾಟ ಮಾಡಿ ಕ್ರಯ ಪತ್ರ ಮಾಡಿಕೊಟ್ಟಿರುತ್ತಾರೆ. ಈ ಆಸ್ತಿಯ ಖರೀದಿದಾರರು ಕೊಡಗು ಜಿಲ್ಲಾಧಿಕಾರಿಯವರಿಂದ ದಿನಾಂಕ:27.03.2010ರಂದು ಆಸ್ತಿಯನ್ನು ಕೃಷಿಯೇತರ ಜಮೀನಿನಲ್ಲಿ ಪರಿವರ್ತಿಸಿಕೊಂಡು ಭೂಪರಿವರ್ತನೆ ಆದೇಶ ಪಡೆದಿರುತ್ತಾರೆ. ಜಪ್ತಿ ಪೂರ್ವ ಆದೇಶದಂತೆ ಈ ಆಸ್ತಿಯನ್ನು ದಿನಾಂಕ:22.05.2014ರಂದು ಬಹಿರಂಗ ಹರಾಜು ಮಾಡಲು ನೋಟೀಸ್ ನೀಡಿದ್ದು, ಸದರಿ ನೋಟಿಸಿಗೆ ಖರೀದಿದಾರರು ದಿನಾಂಕ:21.08.2014ರಂದು ಗೌ॥ ಉಚ್ಚನ್ಯಾಯಾಲಯದಿಂದ ತಡೆಯಾಜ್ಞೆ ತಂದಿರುತ್ತಾರೆ. ಸದರಿ ತಡೆಯಾಜ್ಞೆಯನ್ನು ತೆರವುಗೊಳಿಸಲು ಸಂಘದ ಆಡಳಿತ ಮಂಡಳಿಯವರು |

ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ನ್ಯಾಯಾಲಯದ ಪ್ರಕರಣವನ್ನು ಮೀಡಿಯೇಷನ್‌ನಲ್ಲಿ ರೂ.1,00,01,000/-ಗಳಿಗೆ ಬಗೆಹರಿಸಿಕೊಳ್ಳಲು ಸಂಘವು ತೀರ್ಮಾನಿಸಿ ಅದರಂತೆ ಖರೀದಿದಾರರಿಂದ ರೂ.1,00,01,000/-ಗಳನ್ನು ಪಡೆದು ಪ್ರಕರಣವನ್ನು ಇತ್ಯರ್ಥ ಪಡಿಸಿಕೊಂಡಿರುತ್ತಾರೆ. 2002 ರಿಂದ 2014ರ ಅವಧಿಯಲ್ಲಿ ಕಾರ್ಯನಿರ್ವಹಿಸಿದ ಸಂಘದ ಆಡಳಿತ ಮಂಡಳಿಯು ಸದರಿ ಆಸ್ತಿಯನ್ನು ವಶಕ್ಕೆ ಪಡೆಯಲು ಯಾವುದೇ ಕ್ರಮ ಕೈಗೊಳ್ಳದೆ ಲೋಪವೆಸಗಿದ್ದು, ಇದಕ್ಕೆ ಜವಾಬ್ದಾರರಾಗಿರುತ್ತಾರೆ.

ಮುಂದುವರೆದು ಮೀಡಿಯೇಷನ್ ಸೆಂಟರ್‌ನಲ್ಲಿ ಸದರಿ ಆಸ್ತಿಗೆ ರೂ.1,00,01,000/-ಗಳನ್ನು ಪಡೆದು ಪ್ರಕರಣ ಇತ್ಯರ್ಥಗೊಳಿಸಲು ಆಡಳಿತ ಮಂಡಳಿ ಒಪ್ಪಿ ಗೌ|| ಉಚ್ಚ ನ್ಯಾಯಾಲಯದ ಪ್ರಕರಣದಲ್ಲಿ ಸರ್ಕಾರಿ ಅಧಿಕಾರಿಗಳಾದ ಪ್ರತಿವಾದಿ 2 ಮತ್ತು 3 ರ ಅಹವಾಲು ಸಲ್ಲಿಸಲು ಅವಕಾಶ ಕಲ್ಪಿಸದೇ, ಸಂಘಕ್ಕೆ ಬರಬೇಕಾದ ಒಟ್ಟು ಅಮಲ್ದಾರಿ ಮೊತ್ತ ಮತ್ತು ಬಡ್ಡಿ ಮೊತ್ತವನ್ನು ಗಮನದಲ್ಲಿ ಇಟ್ಟುಕೊಳ್ಳದೇ, ಆಸ್ತಿಯ ಸರ್ಕಾರಿ ಮೌಲ್ಯ ಮತ್ತು ಮಾರುಕಟ್ಟೆ ಮೌಲ್ಯಗಳ ಬಗ್ಗೆ ಪ್ರಸ್ತಾಪಿಸದೇ ವ್ಯವಹಾರ ನಡೆಸಿರುವ ಆಡಳಿತ ಮಂಡಳಿ ಮತ್ತು ಕಾರ್ಯದರ್ಶಿಯವರ ಕರ್ತವ್ಯ ಲೋಪವೆಂದು ಪರಿಗಣಿಸಿ, ಸಂಘಕ್ಕೆ ಬರಬೇಕಾದ ರೂ.4,59,69,000/- ಗಳ ಹಾಗೂ ಬಡ್ಡಿ ಪೂರ್ಣ ವಸೂಲಾಗದೇ ಹೋದ ಪಕ್ಷದಲ್ಲಿ ಸಂಘಕ್ಕೆ ಉಂಟಾಗುವ ನಷ್ಟದ ಮೊತ್ತಕ್ಕೆ ಆಯಾ ಸಾಲಿನಲ್ಲಿ ಕಾರ್ಯನಿರ್ವಹಿಸಿದ ಸಂಘದ ಆಡಳಿತ ಮಂಡಳಿ ನಿರ್ದೇಶಕರುಗಳು ಮತ್ತು ಕಾರ್ಯದರ್ಶಿ ಕಾರಣಕರ್ತರಾಗಿದ್ದು, ಅವರುಗಳ ವಿರುದ್ಧ ಕಾನೂನು ಕ್ರಮ ಜರುಗಿಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರು ಆದೇಶ ಹೊರಡಿಸಿ, ನಿರ್ದೇಶನ ನೀಡಿರುತ್ತಾರೆ.

ವಿಚಾರಣಾ ವರದಿಯಲ್ಲಿ ಕಂಡು ಬಂದ ನ್ಯೂನತೆಗಳ ಕುರಿತು ಕಲಂ 68 ರಡಿ ದಿನಾಂಕ:19.02.2018 ರಂದು ನಿರ್ದೇಶನ ನೀಡಿ ನ್ಯೂನತೆಗಳನ್ನು ಸರಿ ಪಡಿಸಿ ಅನುಪಾಲನಾ ವರದಿ ಸಲ್ಲಿಸಲು ಸಂಘಕ್ಕೆ ಆದೇಶಿಸಲಾಗಿತ್ತು. ಸಂಘವು ಸಲ್ಲಿಸಿದ್ದ ಅನುಪಾಲನಾ ವರದಿಗಳನ್ನು ತಿರಸ್ಕರಿಸಿ ದಿನಾಂಕ:21.06.2021 ರಂದು ಆಡಳಿತ ಮಂಡಲಿ ಸದಸ್ಯರುಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 29 (ಸಿ) ರಡಿ 05 ವರ್ಷಗಳ ಅವಧಿಗೆ ಸಂಘದ ನಿರ್ದೇಶಕರಾಗದಂತೆ ಅನರ್ಹತೆಗೊಳಿಸಿ, ಆಡಳಿತ ಮಂಡಳಿ ಸ್ಥಾನದಲ್ಲಿ ವಿಶೇಷಾಧಿಕಾರಿಯನ್ನು ನೇಮಕ ಮಾಡಿದ್ದು, ವಿಶೇಷಾಧಿಕಾರಿಯವರು ದಿನಾಂಕ:25.06.2021 ರಂದು ಸಂಘದ ಪ್ರಭಾರ ವಹಿಸಿಕೊಂಡಿರುತ್ತಾರೆ. ಸಂಘಕ್ಕೆ ಬರಬೇಕಾದ ವಸೂಲಾತಿಗಳ ಬಗ್ಗೆ ಕಲಂ 64 ರ ವಿಚಾರಣಾ ವರದಿಯನ್ವಯ ಹಾಗೂ ಕಲಂ 68 ರ ನಿರ್ದೇಶನಗಳನ್ವಯ ಕಾನೂನು ಕ್ರಮ ಜರುಗಿಸಲಾಗುವುದು.

**ಸಿಒ 35 ಸಿಹೆಚ್‌ಎಸ್ 2021 (ಇ)**

**(ಎಸ್.ಟಿ.ಸೋಮಶೇಖರ್)**
**ಸಹಕಾರ ಸಚಿವರು**

## ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) ಇವರ ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ: 337 ಕ್ಕೆ ಉತ್ತರ

### ಅನುಬಂಧ-1

ಸಂಘದ ಹಿಂದಿನ ಅಧ್ಯಕ್ಷರಾದ ಡಿ. ರಾಜ್ ಕುಮಾರ್ ಹಾಗೂ ಉಪಾಧ್ಯಕ್ಷರಾದ ಎಂ.ವಿ.ರುದ್ರಾಚಾರ್ ಇವರ ಹಾಗೂ ಸಂಘದ ಸ್ಥಿರಾಸ್ತಿಗಳನ್ನು ಆದೇಶ ಪೂರ್ವ ಜಪ್ತಿಗೊಳಪಡಿಸಿದ ಸ್ಥಿರಾಸ್ತಿಗಳ ವಿವರ ಈ ಕೆಳಕಂಡಂತಿರುತ್ತದೆ:

1) ಎಂ.ವಿ.ರುದ್ರಾಚಾರ್, ಉಪಾಧ್ಯಕ್ಷರು ಇವರ ಆಸ್ತಿಗಳು.

ಅ) ಸೊಣ್ಣೇನಹಳ್ಳಿ ಗ್ರಾಮ ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿರುವ ಸರ್ವೆ ನಂ.27ರ 1.2 1/2 ಎಕರೆ, ಸರ್ವೆ ನಂ.28 ರ 1.08 ಎಕರೆ

ಆ) ರಾಮಸಂದ್ರ ಗ್ರಾಮ, ಕೆಂಗೇರಿ ಹೋಬಳಿ ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿರುವ ಸರ್ವೆ ನಂ.29 ರ 21 ಗುಂಟೆ ಜಮೀನು ಮತ್ತು ಅದರಲ್ಲಿರುವ ಕಟ್ಟಡಗಳ ಸಮೂಹ, ಸರ್ವೆ ನಂ.40:2 ರ 2 ಎಕರೆ

2) ಶ್ರೀಮತಿ ಎಸ್.ಬಿ. ನಾಗರತ್ನಮ್ಮ ಕೋಂ ಶ್ರೀ ಎಂ.ವಿ.ರುದ್ರಾಚಾರ್, ಉಪಾಧ್ಯಕ್ಷರು ಇವರ ಆಸ್ತಿ.

ಇ) ಮನೆ ನಂ.41, 1ನೇ ಮುಖ್ಯರಸ್ತೆ, ಅತ್ತಿಗುಪ್ಪೆ, ವಿಜಯನಗರ 2ನೇ ಹಂತ, ಬೆಂಗಳೂರು-40 ಈ ವಿಳಾಸದ 55*40 ಅಳತೆಯ ನಿವೇಶನದಲ್ಲಿ ನಿರ್ಮಿಸಿರುವ ಎರಡು ಅಂತಸ್ತುಗಳ ಸುಮಾರು 27 ಚದರ ವಿರುವ ಮನೆ.

3) ಡಿ.ರಾಜ್‌ಕುಮಾರ್, ಅಧ್ಯಕ್ಷರು ಇವರ ಆಸ್ತಿಗಳ ವಿವರ.

ಅ) ಮರಗೋಡು ಗ್ರಾಮ, ಮಡಿಕೇರಿ ತಾ॥ ಕೊಡಗು ಜಿಲ್ಲೆಯಲ್ಲಿರುವ

| | |
|---|---|
| ಸರ್ವೆ ನಂ. 1:92ಸಿ ನಲ್ಲಿರುವ | 0.50 ಸೆಂಟ್ |
| ಸರ್ವೆ ನಂ. 1.92ಬಿ ನಲ್ಲಿರುವ | 1.00 ಎಕರೆ |
| ಸರ್ವೆ ನಂ. 1.31 ನಲ್ಲಿರುವ | 6.00 ಎಕರೆ 60 ಸೆಂಟ್ |
| ಸರ್ವೆ ನಂ. 1.98 ರಲ್ಲಿರುವ | 5.00 ಎಕರೆ ಕಾಫಿ ತೋಟ |
| ಸರ್ವೆ ನಂ. 1.102 ರಲ್ಲಿರುವ | 3.00 ಎಕರೆ |
| ಸರ್ವೆ ನಂ.1.92ಎ ನಲ್ಲಿರುವ | 0.28 ಸೆಂಟ್ |

ಆ) ಬೇತು ಗ್ರಾಮ ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆಯಲ್ಲಿರುವ.

| | |
|---|---|
| ಸರ್ವೆ ನಂ. 52:3 ರಲ್ಲಿರುವ | 0.60 ಸೆಂಟ್ |
| ಸರ್ವೆ ನಂ. 79 ರಲ್ಲಿರುವ | 1.33 ಎಕರೆ |
| ಸರ್ವೆ ನಂ. 54:1 ರಲ್ಲಿರುವ | 3.70 ಎಕರೆ |
| ಸರ್ವೆ ನಂ. 54:2 ರಲ್ಲಿರುವ | 5.13 ಎಕರೆ |
| ಸರ್ವೆ ನಂ. 53 ರಲ್ಲಿರುವ | 5.34 ಎಕರೆ |
| ಸರ್ವೆ ನಂ. 52.2 ರಲ್ಲಿರುವ | 0.90 ಸೆಂಟ್ |

ಇ) ಹೊದವಾಡ ಗ್ರಾಮ ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆಯಲ್ಲಿರುವ

| | |
|---|---|
| ಸರ್ವೆ ನಂ. 66:3 ರಲ್ಲಿರುವ | 0.20 ಸೆಂಟ್ |
| ಸರ್ವೆ ನಂ. 65:3 ರಲ್ಲಿರುವ | 3.14 ಎಕರೆ |
| ಸರ್ವೆ ನಂ. 65:1 ರಲ್ಲಿರುವ | 5.40 ಎಕರೆ |
| ಸರ್ವೆ ನಂ. 65:1 ರಲ್ಲಿರುವ | 10.80 ಎಕರೆ |

4) ಶ್ರೀ ಡಿ.ರಾಜ್‌ಕುಮಾರ್ ಮತ್ತು ಶ್ರೀಮತಿ ಡಿ.ಕೋಮಲಾಕ್ಷಿ (ಪತ್ನಿ) ಇವರ ಆಸ್ತಿಗಳು.

ಸರ್ವೆ ನಂ. 120 ರಲ್ಲಿರುವ 1.76 ಸೆಂಟ್
ಸರ್ವೆ ನಂ. 121 ರಲ್ಲಿರುವ 0.02 ಸೆಂಟ್
ಸರ್ವೆ ನಂ. 121:1 ರಲ್ಲಿರುವ 0.01 ಸೆಂಟ್
ಸರ್ವೆ ನಂ. 122 ರಲ್ಲಿರುವ 0.01 ಸೆಂಟ್
ಸರ್ವೆ ನಂ. 122:1 ರಲ್ಲಿರುವ 0.21 ಸೆಂಟ್

(ಈ ಜಾಗದಲ್ಲಿ ನಿರ್ಮಾಣ ಮಾಡಿರುವ 1000 ಚದರ ಅಡಿಯುಳ್ಳ ಕಟ್ಟಡ ಸೇರಿರುತ್ತದೆ) ಬ್ಲಾಕ್ ನಂ.13 ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ.

5) ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘವು ಈ ಕೆಳಕಂಡ ಜಮೀನುಗಳನ್ನು ಖರೀದಿಸಲು ಕರಾರು ಮಾಡಿಕೊಂಡು ಜಮೀನುದಾರರಿಂದ ಜಿ.ಪಿ.ಎ ಪಡೆದು ಮುಂಗಡ ನೀಡಿರುವ ಆಸ್ತಿಗಳು (ಅಂದರೆ ಸಂಘದ ಹೆಸರಿನಲ್ಲಿರುವ ಆಸ್ತಿಗಳು):-

| ಕ್ರ ಸಂ | ಸರ್ವೆ ನಂ | ವಿಸ್ತೀರ್ಣ ಎ:ಗುಂ | ಜಮೀನುದಾರರ ಹೆಸರು | ಗ್ರಾಮ |
|---|---|---|---|---|
| 1 | 213 ಮತ್ತು 213:1ಎ | 2:21 | ಲಕ್ಷ್ಮಮ್ಮ ಮತ್ತು ಮಕ್ಕಳು | ಕೆಂಗೇರಿ ಗ್ರಾಮ, ಕೆಂಗೇರಿಹೋಬಳಿ, ಬೆಂಗಳೂರು ದಕ್ಷಿಣ |
| 2 | 213:1ಎ1 ಮತ್ತು 213:1 ಎ2 | 3:07 | ಇ.ಎಸ್.ಗಂಗಮ್ಮ ಕೆ.ಸಿ.ಅಶ್ವತ್ಥನಾರಾಯಣ ಶೆಟ್ಟಿ | ಕೆಂಗೇರಿ ಗ್ರಾಮ, ಕೆಂಗೇರಿಹೋಬಳಿ, ಬೆಂಗಳೂರು ದಕ್ಷಿಣ |
| 3 | 213:1 ಬಿ | 1:20 | ಎಸ್.ಯಶೋಧ | ಕೆಂಗೇರಿ ಗ್ರಾಮ, ಕೆಂಗೇರಿಹೋಬಳಿ, ಬೆಂಗಳೂರು ದಕ್ಷಿಣ |

**ಸಹಕಾರ ಸಂಘಗಳ ಜಂಟಿ ನಿಬಂಧಕರು,**
**ಬೆಂಗಳೂರು ಪ್ರಾಂತ, ಬೆಂಗಳೂರು**

## ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) ಇವರ ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ: 337 ಕ್ಕೆ ಉತ್ತರ

## ಅನುಬಂಧ-2

ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಅಂದಿನ ಅಧ್ಯಕ್ಷರಾದ ಡಿ. ರಾಜ್‌ಕುಮಾರ್ ಮತ್ತು ಉಪಾಧ್ಯಕ್ಷರಾದ ಎಂ.ವಿ. ರುದ್ರಾಚಾರ್ ಇವರ ಈ ಕೆಳಕಂಡ ಆಸ್ತಿಗಳನ್ನು ಹರಾಜು ಮಾಡಲಾಗಿದ್ದು, ವಸೂಲಾಗಿರುವ ಮೊತ್ತ ಕೆಳಕಂಡಂತಿರುತ್ತದೆ.

| ಕ್ರ.ಸಂ. | ಆಸ್ತಿಯ ವಿವರ | ಮೊತ್ತ |
|---|---|---|
| 1 | ಮರುಗೋಡು ಗ್ರಾಮ ಮಡಿಕೇರಿ ತಾಲ್ಲೋಕಿನ 6 ಸರ್ವೆ ನಂಬರ್‌ಗಳ ಜಮೀನು 11 ಎಕರೆ 10 ಸೆಂಟ್‌ಗಳ ಹರಾಜಿನಿಂದ ಬಂದ ಹಣ | 67,88,000/- |
| 2 | ಹೊದವಾಡ ಗ್ರಾಮ, ಮಡಿಕೇರಿ ತಾಲ್ಲೋಕಿನ 4 ಸರ್ವೆ ನಂಬರ್‌ಗಳ ಜಮೀನು 19 ಎಕರೆ 54 ಸೆಂಟ್‌ಗಳ ಹರಾಜಿನಿಂದ ಬಂದ ಹಣ | 51,48,000/- |
| 3 | ಬೇತು ಗ್ರಾಮ, ಮಡಿಕೇರಿ ತಾಲ್ಲೋಕಿನ 6 ಸರ್ವೆ ನಂಬರ್‌ಗಳ ಜಮೀನು 16 ಎಕರೆ 50 ಸೆಂಟ್‌ಗಳ ಮೀಡಿಯೇಷನ್ ಸೆಂಟರ್‌ನಲ್ಲಿ ಇತ್ಯರ್ಥದಿಂದ ಬಂದ ಹಣ | 1,00,01,000/- |
| 4 | ಅತ್ತಿಗುಪ್ಪೆಯಲ್ಲಿದ್ದ ದಿ॥ ಶ್ರೀ ರುದ್ರಾಚಾರ್ ರವರ ಮನೆ ಹರಾಜಿನಿಂದ (40*75, 4050 ಚ.ಅಡಿ) ಬಂದಹಣ ರೂ. | 1,16,00,000/- |
| | ಒಟ್ಟು | 3,35,37,000/- |

ಸಂಘವು ಹರಾಜು ಪ್ರಕ್ರಿಯೆಗೆ ಒಳಪಡಿಸಿದ್ದು, ಈ ಪೈಕಿ ನಾಲ್ಕು ಆಸ್ತಿಗಳು ಹರಾಜು ಮುಖಾಂತರ ಮಾರಾಟವಾಗಿರುತ್ತದೆ. ಉಳಿದ ಆಸ್ತಿಗಳನ್ನು ಸಂಘವು ಹರಾಜು ಪ್ರಕ್ರಿಯೆಗೆ ಒಳಪಡಿಸಿದಾಗ ಉಂಟಾಗಿರುವ ಕಾನೂನು ತೊಡಕುಗಳ ವಿವರಗಳು ಈ ಕೆಳಕಂಡಂತಿರುತ್ತದೆ.

1. ಸೊಣ್ಣೇನಹಳ್ಳಿ ಗ್ರಾಮ ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿರುವ ಸರ್ವೆ ನಂ.27 ರ 1.2 1/2 ಎಕರೆ, ಸರ್ವೆ ನಂ.28ರ 1.08 ಎಕರೆ ಈ ಆಸ್ತಿಯು ಜಪ್ತಿ ಆದೇಶಕ್ಕೆ ಒಳಪಟ್ಟಿದ್ದು, ದಿನಾಂಕ:04-04-2002 ರಲ್ಲಿ ಕರ್ನಾಟಕ ರಾಜ್ಯ ಪತ್ರದಲ್ಲಿ ಸಹ ಪ್ರಕಟಿಸಲಾಗಿರುತ್ತದೆ. ಆದರೆ ಮೇಲ್ಕಂಡ ಆಸ್ತಿಗಳನ್ನು ನಗರಾಭಿವೃದ್ಧಿ ಇಲಾಖೆಯು ವಿಶ್ವೇಶ್ವರಯ್ಯ ಬಡಾವಣೆ 2ನೇ ಹಂತ ಅಭಿವೃದ್ಧಿಗಾಗಿ ಭೂ ಸ್ವಾಧೀನ ಪಡಿಸಿಕೊಂಡಿರುತ್ತದೆ.
2. ರಾಮಸಂದ್ರ ಗ್ರಾಮ, ಕೆಂಗೇರಿ ಹೋಬಳಿ ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿರುವ ಸರ್ವೆ ನಂ.40:2ರ 2 ಎಕರೆ ಈ ಆಸ್ತಿಯನ್ನು ಸಂಘವು ಹರಾಜು ಪ್ರಕ್ರಿಯೆಗೆ ಒಳಪಡಿಸಿದಾಗ ಇದನ್ನು ಪ್ರಶ್ನಿಸಿ ರೆಡ್ಡಪ್ಪ ಚೆಟ್ಟಿ ಎಂಬುವರು ಸಿವಿಲ್ ನ್ಯಾಯಾಲಯದಲ್ಲಿ ಒಎಸ್ ನಂ-526/2006 ನ್ನು ದಾಖಲಿಸಿದ್ದು ಪ್ರಕರಣದ ವಿಚಾರಣೆ ಪ್ರಗತಿಯಲ್ಲಿರುತ್ತದೆ.

3. ಸೊಣ್ಣೇನಹಳ್ಳಿ ಗ್ರಾಮ, ಕೆಂಗೇರಿ ಹೋಬಳಿ ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿರುವ ಸರ್ವೆ ನಂ.29ರ 21 ಗುಂಟೆ ಜಮೀನು ಮತ್ತು ಅದರಲ್ಲಿರುವ ಕಟ್ಟಡಗಳ ಈ ಆಸ್ತಿಗಳಲ್ಲಿ 03 ಕಟ್ಟಡಗಳಿದ್ದು ಈ ಪೈಕಿ 01 ಕಟ್ಟಡದಿಂದ ಮಾಸಿಕ ರೂ 6000/- ಸಾವಿರ ಬಾಡಿಗೆ ಬರುತ್ತಿದ್ದು ಉಳಿದಂತೆ 01 ಕಟ್ಟಡವನ್ನು ಜಪ್ತಿ ಆದೇಶಕ್ಕೆ ಒಳಪಟ್ಟಿದ್ದು ಇದನ್ನು ಕಾನೂನು ಬಾಹಿರವಾಗಿ ಎಂ.ವಿ ರುದ್ರಾಚಾರ್ ರವರು ಶಿವಶಂಕರ್ ಎಂಬುವವರಿಗೆ ಮಾರಾಟ ಮಾಡಿದ್ದು ಇದನ್ನು ನ್ಯಾಯಾಲಯದಲ್ಲಿ ಸಂಘವು ಪ್ರಶ್ನಿಸಿದ್ದು ಪ್ರಕರಣವು ಪ್ರಗತಿಯಲ್ಲಿರುತ್ತದೆ. ಉಳಿದ ಇನ್ನೊಂದು ಕಟ್ಟಡಕ್ಕೆ ಸಂಬಂಧಿಸಿದಂತೆ ಜ್ಞಾನೇಶ್ ಸ್ಕೂಲ್ ಆಫ್ ನರ್ಸಿಂಗ್ ಇವರ ವಿರುದ್ಧ ಸಂಘವು ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ ಒಎಸ್ 1447/2018 ನ್ನು ದಾಖಲಿಸಿದ್ದು ಪ್ರಕರಣದ ವಿಚಾರಣೆ ಪ್ರಗತಿಯಲ್ಲಿರುತ್ತದೆ.
4. ಕೊಡಗು ಜಿಲ್ಲೆ ಮಡಿಕೇರಿ ತಾಲ್ಲೂಕು ಮರಗೋಡು ಗ್ರಾಮ ಮಡಿಕೇರಿ ತಾಲ್ಲೂಕಿನ ಸರ್ವೆ ನಂ-1.98 ರಲ್ಲಿರುವ 5 ಎಕರೆ ಕಾಫಿ ತೋಟಕ್ಕೆ ಸಂಬಂಧಿಸಿದಂತೆ ದಿನಾಂಕ:27-08-2008 ರಲ್ಲಿ ರೂ 50,50,000/- ಗಳಿಗೆ ಹರಾಜು ಪ್ರಕ್ರಿಯೆ ನಡೆಸಲಾಗಿದ್ದು ಸದರಿ ಹರಾಜು ಪ್ರಕ್ರಿಯೆ ಸ್ಥಿರೀಕರಣ ಆದೇಶಕ್ಕೆ ಶ್ರೀ ಗಣಪತಿ ಎಂಬುವರು ಗೌ॥ ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ:40198/2014 ತಡೆಯಾಜ್ಞೆ ತಂದಿದ್ದು ಪ್ರಕರಣದ ವಿಚಾರಣೆ ಪ್ರಗತಿಯಲ್ಲಿರುತ್ತದೆ. ಸರ್ವೆ ನಂ-1/92 ಎ ರಲ್ಲಿರುವ 28 ಸೆಂಟ್ ಜಮೀನನ್ನು ದಿನಾಂಕ:22-08-2014 ರಂದು ರೂ 7,06,000/- ಗಳಿಗೆ ಹರಾಜು ಪ್ರಕ್ರಿಯೆ ಕೈಗೊಂಡಿದ್ದು, ಶ್ರೀ ರಾಮಚಂದ್ರ ಎಂಬುವರು ಇದನ್ನು ಸಹಕಾರ ಸಂಘಗಳ ಉಪ ನಿಬಂಧಕರು ಕೊಡಗು ಜಿಲ್ಲೆ ಮಡಿಕೇರಿ ಇವರ ಮುಂದೆ ದಾವೆ ದಾಖಲಿಸಲಾಗಿ ಸದರಿ ದಾವೆ ವಜಾಗೊಂಡಿರುತ್ತದೆ. ಹರಾಜು ಪ್ರಕ್ರಿಯೆಗೆ ಬಾಕಿಯಿರುತ್ತದೆ.
5. ಸರ್ವೆ ನಂ. 120, 121, 121/1, 122, ಹಾಗೂ 122/1 ರ ಒಟ್ಟು 201 ಸೆಂಟ್ ಜಾಗದ (ಈ ಜಾಗದಲ್ಲಿ ನಿರ್ಮಾಣ ಮಾಡಿರುವ 1000 ಚದರ ಅಡಿಯುಳ್ಳ ಕಟ್ಟಡ ಸೇರಿರುತ್ತದೆ.) ಬ್ಲಾಕ್ ನಂ.13 ಮಡಿಕೇರಿ ಟೌನ್, ಕೊಡಗು ಜಿಲ್ಲೆ. ಈ ಆಸ್ತಿಯು ಮಡಿಕೇರಿ ಪಟ್ಟಣ ಪಂಚಾಯ್ತಿಯ ದಾಖಲಾತಿಗಳಿಗೆ ಸಂಘದ ಹೆಸರಿಗೆ ದಾಖಲಾಗಿರುತ್ತದೆ. ಸದರಿ ಆಸ್ತಿಯನ್ನು ಹರಾಜು ಪ್ರಕ್ರಿಯೆಗೆ ಒಳಪಡಿಸಿದಾಗ ಇದನ್ನು ಪ್ರಶ್ನಿಸಿ, ಮೇ ಹೃದಯ ಹೋಲ್ಡಿಂಗ್ಸ್ ಪ್ರವೇಟ್ ಲಿ,. ಇವರು ಗೌ: ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 304/2015 ರಲ್ಲಿ ಪ್ರಶ್ನಿಸಿದ್ದು ಹರಾಜು ಪ್ರಕ್ರಿಯೆಗೆ ತಡೆಯಾಜ್ಞೆಯಿದ್ದು, ವಿಚಾರಣೆ ಪ್ರಗತಿಯಲ್ಲಿರುತ್ತದೆ.
6. ಸಂಘದ ಕೆಂಗೇರಿ ವ್ಯಾಪ್ತಿಯ ಗ್ರಾಮಕ್ಕೆ ಸೇರಿದ ಸರ್ವೆ ನಂ.213/1ಎ ರಲ್ಲಿರುವ 3 ಎಕರೆ 7 ಗುಂಟೆ ಭೂ ಪರಿವರ್ತಿತ ಜಾಗವನ್ನು ಆದೇಶಪೂರ್ವ ಜಪ್ತಿ ಆದೇಶಕ್ಕೊಳಪಟ್ಟಿರುತ್ತದೆ. ಈ ಆಸ್ತಿಗೆ ಸಂಬಂಧಿಸಿದಂತೆ ಗೌ॥ ಉಚ್ಚ ನ್ಯಾಯಾಯದಲ್ಲಿ ರಿಟ್ ಅರ್ಜಿ ಸಂಖ್ಯೆ:50946-947/2016 ದಾಖಲಾಗಿದ್ದು, ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ.
7. ಸಂಘದ ಕೆಂಗೇರಿ ಆಸ್ತಿಯ ಸರ್ವೆ 213 ಮತ್ತು 213.ಎ ರಲ್ಲಿ 2 ಎಕರೆ 21 ಗುಂಟೆ ಹಾಗೂ ಸರ್ವೆ ನಂ-213: 1 ಬಿ, ರಲ್ಲಿ 1 ಎಕರೆ 20 ಗುಂಟೆ, ಈ ಆಸ್ತಿಯು ಜಪ್ತಿ ಆದೇಶಕ್ಕೆ ಒಳಪಟ್ಟಿರುತ್ತದೆ. ಸದರಿ ಆಸ್ತಿಗಳನ್ನು ನಗರಾಭಿವೃದ್ಧಿ ಇಲಾಖೆಯು ವಿಶ್ವೇಶ್ವರಯ್ಯ ಬಡಾವಣೆ 2ನೇ ಹಂತ ಅಭಿವೃದ್ಧಿಗಾಗಿ ಭೂ ಸ್ವಾಧೀನ ಪಡಿಸಿಕೊಂಡಿರುತ್ತದೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು